# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧ Volume 151 | ಬೆಂಗಳೂರು, ಗುರುವಾರ, ಡಿಸೆಂಬರ್ ೧, ೨೦೧೬ (ಮಾರ್ಗಶಿರ ೧೦, ಶಕ ವರ್ಷ ೧೯೩೮) Bengaluru, Thursday, December 1, 2016 (Margashira 10, Shaka Varsha 1938) | ಸಂಚಿಕೆ ೪೭ Issue 47 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಹಕಾರ ಸಚಿವಾಲಯ

**ವಿಷಯ :** ಬಾಪೂಜಿ ಗ್ರಾಮೀಣ ವಿಕಾಸ ಸಮಿತಿ (ರಿ), ಸದಾಶಿವಗಡ, ಕಾರವಾರ, ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸಿರುವ ಆದೇಶವನ್ನು ರದ್ದುಗೊಳಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಸ ಇ 21 ಸಸಂಸೋ 2016, ಬೆಂಗಳೂರು, ದಿನಾಂಕ: 02.08.2016.**

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಕಂಇ 04 ಮುಸೋಸೋ 2013, ಬೆಂಗಳೂರು, ದಿನಾಂಕ:04.03.2014.
2) ಮಾನ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:104134/2014 ರ ಮಧ್ಯಂತರ ಆದೇಶ ದಿನಾಂಕ:25.03.2014.
3) ಮಾನ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:104134/2014 ರ ಆದೇಶ (ತೀರ್ಪು) ದಿನಾಂಕ: 21.01.2015.
4) ಅಧ್ಯಕ್ಷರು, ಬಾಪೂಜಿ ಗ್ರಾಮೀಣ ವಿಕಾಸ ಸಮಿತಿ (ರಿ), ಸದಾಶಿವಗಡ, ಕಾರವಾರ ಇವರ ಮನವಿ ದಿನಾಂಕ: 05.07.2016.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಾಪೂಜಿ ಗ್ರಾಮೀಣ ವಿಕಾಸ ಸಮಿತಿ (ರಿ), ಸದಾಶಿವಗಡ, ಕಾರವಾರ ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸಿ ಆದೇಶಿಸಲಾಗಿರುತ್ತದೆ. ಈ ನೇಮಕವನ್ನು ಪ್ರಶ್ನಿಸಿ ಅಧ್ಯಕ್ಷರು, ಬಾಪೂಜಿ ಗ್ರಾಮೀಣ ವಿಕಾಸ ಸಮಿತಿ (ರಿ), ಸದಾಶಿವಗಡ, ಕಾರವಾರ ಇವರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್‌ಅರ್ಜಿ ಸಂಖ್ಯೆ: 104134/2014ನ್ನು ದಾಖಲಿಸಿದ್ದು ಸದರಿ ಆಡಳಿತಾಧಿಕಾರಿ ನೇಮಕಾತಿಯ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯವು ಉಲ್ಲೇಖ(2)ರಲ್ಲಿ ಓದಲಾದ ಮಧ್ಯಂತರ ಆದೇಶದಂತೆ ತಡೆಯಾಜ್ಞೆಯನ್ನು ನೀಡಿರುತ್ತದೆ. ನಂತರ ಉಲ್ಲೇಖ(3)ರಲ್ಲಿ ಓದಲಾದ ಆದೇಶದಲ್ಲಿ ಸಂಸ್ಥೆಯವರು ಅರ್ಜಿಯನ್ನು ಹಿಂಪಡೆಯಲು ಅನುಮತಿಯನ್ನು ನೀಡಿ ಪ್ರಕರಣವನ್ನು ಮುಕ್ತಾಯಗೊಳಿಸಿರುತ್ತದೆ. ಉಲ್ಲೇಖ(4)ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು, ಬಾಪೂಜಿ ಗ್ರಾಮೀಣ ವಿಕಾಸ ಸಮಿತಿ (ರಿ), ಸದಾಶಿವಗಡ, ಕಾರವಾರ ಇವರು ಸಂಸ್ಥೆಯವರು ಯಾವುದೇ ಕಾನೂನು ಉಲ್ಲಂಘನೆಯನ್ನು ಮಾಡಿರುವುದಿಲ್ಲವೆಂದೂ, ಎಲ್ಲಾ ಲೆಕ್ಕ ಪತ್ರಗಳನ್ನು ಚಾರ್ಟರ್ಡ್ ಅಕೌಂಟೆಂಟ್‌ರವರಿಂದ ಆಡಿಟ್ ಮಾಡಿಸಿ ಪ್ರತಿ ವಾರ್ಷಿಕ ಸರ್ವ ಸದಸ್ಯರ ಸಭೆಯಲ್ಲಿ ಅನುಮೋದಿಸಿ ಜಿಲ್ಲಾ ನೋಂದಣಾಧಿಕಾರಿಯವರಿಂದ ಈ ಪ್ರತಿಗಳಿಗೆ ಅನುಮೋದನೆ ಪಡೆಯಲಾಗಿದ್ದು, ಈ ರೀತಿ ಗ್ರಾಮೀಣಾ ಭಾಗದ ಜನರಿಗೆ ಗುಣಮಟ್ಟದ ಶಿಕ್ಷಣವನ್ನು ನೀಡುವ ಸದ್ದುದ್ದೇಶದಿಂದ ಪ್ರಾರಂಭವಾದ ಸಮಿತಿಯ ವಿರುದ್ಧ ಮಾಡಲಾಗಿರುವ ಆರೋಪಗಳು ಸತ್ಯಕ್ಕೆ ದೂರವಾಗಿದ್ದು, ಆಡಳಿತಾಧಿಕಾರಿ ನೇಮಕಾತಿಯನ್ನು ರದ್ದುಗೊಳಿಸಿ ಸ್ವತಂತ್ರ್ಯವಾಗಿ ಕಾರ್ಯನಿರ್ವಹಿಸಲು ಅನುವು ಮಾಡಿ ಕೊಡಬೇಕೆಂದು ಕೋರಿರುತ್ತಾರೆ. ಸದಿಯವರ ಮನವಿಯನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಲಾಗಿ, ಸಮಿತಿಯು ಲೆಕ್ಕಪತ್ರಗಳನ್ನು ಸಂಬಂಧಪಟ್ಟ ಚಾರ್ಟರ್ಡ್ ಅಕೌಂಟೆಂಟ್‌ರವರಿಂದ ಆಡಿಟ್ ಮಾಡಿಸಿ, ಪ್ರತಿ ವರ್ಷ ಸರ್ವ ಸದಸ್ಯರ ಸಭೆಗಳಲ್ಲಿ ಅನುಮೋದಿಸಿ ಜಿಲ್ಲಾ ನೋಂದಣಾಧಿಕಾರಿಗಳಿಂದ ಪ್ರತೀ ವಾರ್ಷಿಕ ಲೆಕ್ಕಪತ್ರಗಳಿಗೆ ಅನುಮೋದನೆ ಪಡೆದಿರುವುದು ಹಾಗೂ 2012ನೇ ಸಾಲಿನಿಂದ ವಾರ್ಷಿಕ ಸರ್ವ ಸದಸ್ಯರ ಸಭೆಗಳನ್ನು ನಿಯಮಿತವಾಗಿ ನಡೆಸಿರುವುದು ಕಂಡುಬರುತ್ತದೆ. ಆದಕಾರಣ, ಬಾಪೂಜಿ ಗ್ರಾಮೀಣ ವಿಕಾಸ ಸಮಿತಿ (ರಿ), ಸದಾಶಿವಗಡ, ಕಾರವಾರ ಈ ಸಂಘಕ್ಕೆ ನೇಮಿಸಿರುವ ಆಡಳಿತಾಧಿಕಾರಿಯ ನೇಮಕವನ್ನು ರದ್ದುಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಾಪೂಜಿ ಗ್ರಾಮೀಣ ವಿಕಾಸ ಸಮಿತಿ (ರಿ), ಸದಾಶಿವಗಡ, ಕಾರವಾರ, ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸಿರುವ ಆದೇಶ ಸಂಖ್ಯೆ: ಕಂಇ 04 ಮುನೋಸೋ 2013, ಬೆಂಗಳೂರು, ದಿನಾಂಕ: 04.03.2014ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿದೆ.

PR. 637
SC. 25

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಬಿ. ಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಆರ್ಥಿಕ ಸಚಿವಾಲಯ**

**ವಿಷಯ :** ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಎಸ್.ಎ.ಎಸ್, ಇಲಾಖಾ ಪರೀಕ್ಷೆಯ 6 ಪತ್ರಿಕೆಗಳಿಗೆ ವಸ್ತುನಿಷ್ಠ ಬಹು ಆಯ್ಕೆ ಬದಲಿಗೆ ವಿವರಣಾತ್ಮಕ ಪ್ರಬಂಧ ಮಾದರಿಯಲ್ಲಿ ಪರೀಕ್ಷೆಗಳನ್ನು ನಡೆಸುವ ಬಗ್ಗೆ.

**ಓದಲಾಗಿದೆ :**
1) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಅವರ ಪತ್ರ ಸಂಖ್ಯೆ:ಡಿಇ (1) 370/15-16/ಪಿಎಸ್‌ಸಿ, ದಿನಾಂಕ: 21.12.2015.
2) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1) 396/2015-16, ಪಿಎಸ್‌ಸಿ ದಿ:04.01.2016.
3) ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 9 ಸೇಸೆನಿ 2014, ದಿ:15.03.2016, ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಸೇವಾ ನಿಯಮಗಳು-1) ಅವರಿಂದ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಸಿಬ್ಬಂದಿಗೆ ನಿಗದಿಪಡಿಸಿದ್ದ ಎಸ್.ಎ.ಎಸ್ ಇಲಾಖಾ ಪರೀಕ್ಷೆಗಳನ್ನು ವಿವರಣಾತ್ಮಕ ಪ್ರಬಂಧ ಮಾದರಿಯಿಂದ ವಸ್ತುನಿಷ್ಠ ಬಹು ಆಯ್ಕೆ ಪದ್ಧತಿಗೆ ಬದಲಿಸಿದ ಕಾರಣದಿಂದಾಗಿ ಅಭ್ಯರ್ಥಿಗಳು ಸಿದ್ದ ಉತ್ತರಗಳಲ್ಲಿಯೇ ಆಯ್ಕೆ ಮಾಡಿ ಅದನ್ನು ಮಾತ್ರ ಗುರುತು ಮಾಡುವ ಕ್ರಿಯೆ ಕಂಡುಬರುತ್ತಿತ್ತು, ಈ ಪದ್ಧತಿಯಲ್ಲಿ ಉತ್ತರಗಳನ್ನು ಅಭ್ಯರ್ಥಿಗಳು ಅಂದಾಜಿಸುತ್ತಿದ್ದ ಕಾರಣದಿಂದಾಗಿ ಈ ಸೇವೆಗೆ ಸಂಬಂಧಿಸಿದ ನಿಯಮಗಳ ಸ್ವರೂಪವನ್ನು ಅಧ್ಯಯನ ಮಾಡಿ ನಿಯಮಗಳ ಸಂಖ್ಯೆ, ಅವುಗಳ ಸ್ವರೂಪ ಅಕೌಂಟಿಂಗ್ ಪ್ರಕ್ರಿಯೆಯಲ್ಲಿ ಅವುಗಳು ಪ್ರಸ್ತುತವಾಗುವ ಸನ್ನಿವೇಶಗಳ ಕುರಿತಂತೆ ಪರೀಕ್ಷೆಯಲ್ಲಿ ಬರೆದು ನಿಯಮಗಳೆಡೆಗಿನ ಅವರ ಜ್ಞಾನವನ್ನು ಗಳಿಸುವ ಅವಕಾಶ ಕಡಿಮೆ ಆಗಿತ್ತು, ಇದರಿಂದಾಗಿ ಪರಿಶ್ರಮ ಪಡೆಯೂ ಊಹೆಯ ಮೇಲೆ ಪ್ರಶ್ನೆಗಳನ್ನು ಗುರುತು ಮಾಡಿ ಉತ್ತೀರ್ಣರಾಗುವ ಅವಕಾಶ ಉಂಟಾಗಿ ಸಿಬ್ಬಂದಿಯ ಜ್ಞಾನವನ್ನು ವೃದ್ಧಿಸಿಕೊಳ್ಳುವ ಸಂದರ್ಭಗಳು ಇರಲಿಲ್ಲ, ಕ್ರಮೇಣ ಈ ಬೆಳವಣಿಗೆಯಿಂದಾಗಿ ಇಲಾಖೆಯ ಅಕೌಂಟಿಂಗ್ ಜ್ಞಾನದ ತೀಕ್ಷ್ಣತೆಯು ಕುಂಠಿತಗೊಂಡು ಅದರ ಪ್ರತಿಕೂಲ ಪರಿಣಾಮವು ಇಲಾಖೆಯ ಕಾರ್ಯವೈಖರಿಯ ಮೇಲೂ ಗೋಚರಿಸತೊಡಗಿತು.

ಈ ಎಲ್ಲಾ ಕೊರತೆಗಳನ್ನು ನಿವಾರಿಸಿ ಎಸ್.ಎ.ಎಸ್. ಪರೀಕ್ಷೆಯನ್ನು ವಸ್ತುನಿಷ್ಠ ಬಹು ಆಯ್ಕೆ ವಿಧಾನದಿಂದ ವಿವರಣಾತ್ಮಕ ಪ್ರಬಂಧ ಮಾದರಿಗೆ ಬದಲಿಸುವ ಕುರಿತು ಸಂಬಂಧಪಟ್ಟ ಎಲ್ಲರೊಡನೆ ಸಮಾಲೋಚಿಸಿದ ಕರ್ನಾಟಕ ಲೋಕಸೇವಾ ಆಯೋಗವು ಮೇಲೆ (2) ರಲ್ಲಿ ಓದಲಾದ ದಿ:04.01.2016ರ ಅಧಿಸೂಚನೆಯಲ್ಲಿ ಎಸ್.ಎ.ಎಸ್. ಪರೀಕ್ಷೆಯನ್ನು ವಿವರಣಾತ್ಮಕ ಪ್ರಬಂಧ ಮಾದರಿಯಲ್ಲಿ ನಡೆಸಲು ಕ್ರಮ ಜರುಗಿಸಿದೆ. ಇದನ್ನು ಸಂಬಂಧಪಟ್ಟ ಎಲ್ಲರ ಮಾಹಿತಿಗೆ ತರುವ ವಿಷಯವನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಆಇ 395 ರಾಲೆಪ 2013, ಬೆಂಗಳೂರು, ದಿ: 12ನೇ ಸೆಪ್ಟೆಂಬರ್ 2016.**

ಕರ್ನಾಟಕ ಲೋಕಸೇವಾ ಆಯೋಗವು ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಅಧಿಕಾರಿ/ಸಿಬ್ಬಂದಿಗಾಗಿ ನಡೆಸುತ್ತಿರುವ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷಾ) ನಿಯಮಗಳು 1974 ರ IIರ ಕ್ರಮಸಂಖ್ಯೆ: 12 ರ ಎಸ್.ಎ.ಎಸ್. ಇಲಾಖಾ ಪರೀಕ್ಷೆಯಲ್ಲಿನ 11 ಪತ್ರಿಕೆಗಳ ಪೈಕಿ ಈ ಕೆಳಕಂಡ 6 ಪತ್ರಿಕೆಗಳಿಗೆ ವಸ್ತುನಿಷ್ಠ ಬಹು ಆಯ್ಕೆ ಮಾದರಿಯ ಬದಲಾಗಿ ವಿವರಣಾತ್ಮಕ ಪ್ರಬಂಧ ಮಾದರಿಯಲ್ಲಿ ಪರೀಕ್ಷೆಯನ್ನು ನಡೆಸಲು ಮೇಲೆ (2) ರಲ್ಲಿ ಓದಲಾದ ದಿ:04.01.2016ರ ಅಧಿಸೂಚನೆಯಲ್ಲಿ ನಿರ್ಣಯಿಸಿದೆ ಎಂದು ಸಂಬಂಧಪಟ್ಟ ಎಲ್ಲರ ಗಮನಕ್ಕೆ ಈ ಮೂಲಕ ಪ್ರಚುರಪಡಿಸಲಾಗಿದೆ:-

1. ಎಸ್.ಎ.ಎಸ್. ಭಾಗ-I, ಪತ್ರಿಕೆ-3
2. ಎಸ್.ಎ.ಎಸ್. ಭಾಗ-II, ಪತ್ರಿಕೆ-2
3. ಎಸ್.ಎ.ಎಸ್. ಭಾಗ-II, ಪತ್ರಿಕೆ-3
4. ಎಸ್.ಎ.ಎಸ್. ಭಾಗ-III, ಪತ್ರಿಕೆ-1
5. ಎಸ್.ಎ.ಎಸ್. ಭಾಗ- III, ಪತ್ರಿಕೆ-3
6. ಎಸ್.ಎ.ಎಸ್. ಭಾಗ-III, ಪತ್ರಿಕೆ-5

PR. 638

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್,**
ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಸಮನ್ವಯ).

**ಕಾರ್ಮಿಕ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಕಾಇ 223 ಎಲ್ಎಸ್ಐ 2016, ಬೆಂಗಳೂರು, ದಿನಾಂಕ: 21–09–2016.**

ಸರ್ಕಾರದ ಆದೇಶ ಸಂಖ್ಯೆ: ಕಾಇ 223 ಎಲ್ಎಸ್ಐ 2016 ದಿನಾಂಕ: 12–09–2016ರ ಆದೇಶ ಭಾಗದಲ್ಲಿ "30 ಆಸ್ಪತ್ರೆಗಳ ಹೆಸರಿನ ಮುಂದೆ ನಮೂದಿಸಿರುವ ಮೊತ್ತದ ಬಿಲ್ಲುಗಳ ಒಟ್ಟು ಮೊತ್ತ ₹. 18,46,88,769/- ಗಳನ್ನು" ಎಂಬುದರ ಬದಲಾಗಿ **"63 ಆಸ್ಪತ್ರೆಗಳ ಹೆಸರಿನ ಮುಂದೆ ನಮೂದಿಸಿರುವ ಮೊತ್ತದ ಬಿಲ್ಲುಗಳ ಒಟ್ಟು ಮೊತ್ತ ₹. 18,46,88,769/- ಗಳನ್ನು"** ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಲಕ್ಷ್ಮೀದೇವಿ,**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ.

## ANNEXURE

| Delay bills sent to Government | | | | |
|---|---|---|---|---|
| **Sl. No.** | **Name of Hospitals & Phone & Fax No.** | **Inward Date/Re-submission dates after attending objection** | **Bill Period** | **Amount** |
| 1 | M.S.Ramaiah Hospital,<br>M.S.R. Nagar, Bengaluru-560054. | 22-11-14 & 07-04-16 | 10/2014 to 8/2015 | 4705267 |
| 2 | Sagar Hospital DSI,<br>Kumaraswamy Layout,<br>Banashankari, Bengaluru | 04-02-2013, 11-10-2013, 30-11-2014, 31-11-15 | 7/2013 to 9/2013 & 1/2014 to 12/2014 | 2058426 |
| 3 | Narayana Nethralaya, Rajajinagar, Bengaluru-560010. | 01-06-2015 & 02-02-2016 | 5/2014 to 12/2014 | 1425493 |
| 4 | Narayana Nethralaya-2, Narayana Health City,<br>Narayana Hrudayalaya<br>Campus) Bommsasandra, Bengaluru. | 12/18/2015 | 3/2014 to 9/2014 | 978346 |
| 5 | Lalith Healthcare Pvt Ltd (A Fortis Net work Hospital,) Sheshadripuram, Bengaluru & | 14-10-2014 & 13-10-2015 | 4/2014 to 9/2014 | 203074 |
| 6 | Fortis Hospital limited, Bannergatta Road, Bengaluru. | 27-01-15 & 03-10-2015 | ·8/2014 & 1,2,4/2015 | 996153 |
| 7 | Live-100 H0spital Bengaluru | 12/3/2015 | 2/2013 to 12/2013 & 1,4,3,6,8,9/2014 | 831168 |
| 8 | Hosmat Hospital, Bengaluru | 05-02-2015, 29-05-2015, 01-03-2016 | 10/2013 & 3,4,5,6,10/2014 | 1592027 |
| 9 | Apollo Hospitals,<br>Bannergatta Road, Bengaluru. | 19-02-2014, 06-03-2015 | 12/2013 to 3/2015 | 1317244 |
| 10 | Dr:B.R.Ambedkar Medical<br>Collage & Hospital, Bengaluru | 09-09-2014, 01-03-2015 | 4/2014 to 12/2014 | 1462374 |
| 11 | M.R.Ambedkar Dental Collage & Hospital, Bengaluru. | 20-11-2015 | 4/2014 to 9/2014 | 240551 |
| 12 | SDS TB & RGICD, Bengaluru. | 15-02-2014, 24-05-2015 | 9/2013 to 12/2013 & 2/2014 to 12/2014 | 563633 |
| 13 | Sanjaya Gandhi Institute<br>of Trauma Centre, Bengaluru. | 03-02-2015, 03-10-2015 | 4/2014 to 10/2014 | 583507 |
| 14 | Indiragandhi Insititute of<br>Child Health Hospital, Bengaluru. | 06-01-2014, 08-03-15 | 6/2013 to 12/2013 & 1/2014 to 3/2015 | 2295189 |

| | | | | |
|---|---|---|---|---|
| 15 | M.S.Ramaiah Harsha Hospital, Nelamangala, Bengaluru. | 05-06-2013, 29-01-2016 | 4/2013 to 12/2013 | 146875 |
| 16 | Meenakshi Hospital, Hanumanthanagar. | 11-02-2015 | 7,8/2014 | 110385 |
| 17 | P.D.Hinduja Sindhi Hosp, Bengaluru. | 25-04-2015 | 3,4/2013 | 18614 |
| 18 | Sakra Word Hospital | 07-10-2014, 12-01-2016 | 7,8/2014 | 41999 |
| 19 | Subbaiah Hospital, Shivamogga | 23-11-2015, 08-08-2014 | 4,5/2014 | 32287 |
| 20 | Subbaiah Medical Collage Hospital & Research Centre, Shivamogga | 04-01-2016 | 4,5,9/2014 | 89192 |
| 21 | Durga Hospital, Bhadravathi. | 10-11-2015 | 4,7,9, 11/2014 to 1,2,3,6/20158 | 91972 |
| 22 | N.H.Sahyadri Narayana Hrudyalaya, Shivamogga | 15-06-2015, 30.02.2016 | 4/2015 to 6/2015 | 17546 |
| 23 | Shankar Eye Hospital, Shivamogga | 22-11-2015 | 4,5/2015 | 29109 |
| 24 | K.M.C Hospital, Attavar & Ambedkar, Mangaluru | 10-07-2014, 23-01-2016 | 4,5,6/2014 | 11875783 |
| 25 | Kasturaba Hospital, Manipal | 26-09-2012, 16-06-2016 | 6/2012 to 7/2014 | 74997886 |
| 26 | Father Mullar Medical Charitable Institutions, Mangaluru - 575002 | 08-09-2012, 21-11-2015 | 7/2012 to 5/2015 | 10407619 |
| 27 | A.J.Hospital & Research Centre, Mangaluru-575004. | 27-11/2012, 04-02-2016 | 1,8,9,10,11,12/2012 to 1,3,7,11,12/2013 & 1,2,4,6,7,8/2014 | 3006077 |
| 28 | Unity Health Complex,' Mangaluru. | 04-03-2015, 16-01-2016 | 12/2013, 2,3,7,9,10,11/2014 & 1,2,3,5,7/2015 | 3244096 |
| 29 | ·Prasad Netralaya Netralaya Super Speciality Eye Hospital, Mangaluru. | 28-03-2016, | Mar-15 | 7695 |
| 30 | Srinivas Institute of Medical Sciences and Research Centre, Mangaluru. | 2,3,9/2015, 21-12/2015 | 11,12/2014 & 2/2015 | 134751 |
| 31 | Justice K.S.Hegde Charitable Hospital, Derlkatte, Mangaluru -575018. | 26-10-2013, 28.12.2015 | 7/2013 to 6/2015 | 5265969 |
| 32 | Adarsha Hospital, N.H.66, Kundapur. | 03-12-2014 & 10-03-2014 | 9/2013 & 6,7,9/2014 | 245604 |
| 33 | Vinaya Hospital, Kundapur, Udupit dist. | 30-12-2014, 12-03-2014 | 1,6,7,8,9/2014 | 205668 |
| 34 | Prasad Netralaya, Netralaya Super Speciality Eye Hospital, Udupi. | 02-12-2014, 25-11-2015 | Oct-14 | 28476 |
| 35 | Hitech Medicare Hospital, Udupi. | 21-02-2014, 19-10-2015 | 1,6,7,9/2014 | 273370 |
| 36 | Adarsha Hospital, Udupi. | 01-12-2013 & 05-01-2016 | 10/2013 to 2/2015 | 62535 |
| 37 | T.M.A pai Hospital Udupi. | 03-04-2015, 02-01-16 | 8/2012 to 10/2014 | 5995689 |
| 38 | TM.A pai Hospital Karkala. | 07-08-2015, 03-12-2015 | 4/2014 to 10/2014 | 766194 |

| | | | | |
|---|---|---|---|---|
| 39 | River View Hospital, Mysuru-570016 | 31-10-2014, 12-08-2015 | 1,3,4,5,6,9,10/2014 & 1,2,3,5,6/2015 | 277041 |
| 40 | JSSHospital, Mysuru. | 03-01-2014, 03-11-2015 | 8,9,11,12/2013 & 1/2014 to 12/2014 & 1,3,4,5,6,7/2015 | 11003640 |
| 41 | Bhagavan Mahaveer Dharshan Eye Hospital Mysuru. | 02-06-2015 | 9/2014 & 4/2015 | 131244 |
| 42 | Bhanvi Hospital Mysuru. | 08-06-2015, 04-01-16 | 10,12/2014 & 2,5/2015 | 313779 |
| 43 | Apollo B.G.S Hospital, Mysuru | 05-06-2015, 22-02-2016 | 1,2,3,4/2015 | 8136847 |
| 44 | Vijaya Ortho and Trauma Centre, Belagavi | 10-09-2014, | 4/2014 & 8/2014 | 145842 |
| 45 | Yash Hospital Critial Care Centre, Belagavi. | 14-12-2015, 20-01-2016 | 3,4,5/2015 | 75426 |
| 46 | S.S.Institute of Medical Sciences & Research Centre, Davanagere - 577 005. | 07-10-2015, | 8,10,11,12/2014 | 1208321 |
| 47 | Mavintop Hospital, Davangere. | 13-03-2015 & 07-01-2016 | Feb-15 | 65000 |
| 48 | M.M. Joshi Eye Institute, Hubli. | 02-12-2016 | 3,4,5,6/2015 | 618036 |
| 49 | S.D.M College of Medical Sciences & Hospital, Dharwad, | 06-07-2013, 05-08-2015 | 4,7,8,9,10,11,12/2013 & 1,2,3,5,6,7,8,11/2014 & 1,2,4/2015 | 17496932 |
| 50 | Sri.Dharmasthala Manjunatheshwara Collage of Dental Sciences & Hospital, Dharwad. | 08-11-2012, 04-05-2014 | 9/2012 & 1,2,3/2013 | 2293170 |
| 51 | Shridevi Institute of Medical Sciences & Research Hospital, Tumakuru. | 21-08-2015, 02-09-2015, 07-05-2016 | 9/2014 to 5/2015 | 428886 |
| 52 | Dr. Mahadevappa Eye Laser Hospital, Tumakuru. | 18-03-2015, 22-02-2016 | 7,8,9,10/2014 | 111274 |
| 53 | Maithri Multi Speciality Hospital. Hosapete. | 03-01-2015, 05-01-2016 | 3/2014 to 9/2014 & 1/2015 to 6/2015 | 980273 |
| 54 | Sri. Thirumala Hospital, Ballari. | 31-09-2015, 15-02-16 | 7/2014 to 1,2/2015 | 119998 |
| 55 | Basaveshwara Medical Collage & Hospital & Research Centre, Chitradurga. | 21-12-14, 20-01-16 | 1,2,3,4,5,6,7,9/2014 | 1885344 |
| 56 | P.V.S. Hospital, Chitradurga. | 10-12-2015, | 2,3,11/2014 | 98394 |
| 57 | Sri. Thirumala Hospital, Challakere | 27-08-2014, 11-01-2016 | 7,10,12/2014 & 5/2015 | 115866 |
| 58 | Mangala Hospital, Hassan, | 25-01-2016, | 10,12/2013 & 5,7/2014 & 1,2,3,4/2015 | 402998 |
| 59 | Mahatma Gandhi Multispeciality Hospital, Gadag, | 03-08-2014, 29-02-2016 | 6/2014 to 12/2014 & 1/2015 | 88939 |
| 60 | K.H. Patil Hospital & Research Institute, Hulakoti | 02-08-2015, 04-11-2015 | 3,5/2015 | 33031 |
| 61 | Shri. B.M.Patil Medical Collage Hospital, Bijapur. | 21-03-14, 07-11-15 | 1/2014 to 7/2015 | 2217972 |

| | | | | |
|---|---|---|---|---|
| 62 | Annapurna Multispeciality Hospital, Gangavathi. | 3-3-2014, 07-12-2015 | 12/2013 to 1,6/2014 | 73735 |
| 63 | S.Nijalingappa Medical Collage & Hanagol Shri Kumareshwar Hospital & Research Centre, Bagalkot. | 27-08-2015, | 8,9,10,12/2014 & 5/2015 | 18938 |
| | | | **Total** | **184688769** |

**PR. 639**

**SC. 50**

**ಲಕ್ಷ್ಮೀದೇವಿ,**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** 2016–17ನೇ ಸಾಲಿಗೆ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಡಿ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 55 ವೆಚ್ಚ–2/2016, ದಿನಾಂಕ: 01.04.2016.
2) ಸರ್ಕಾರದ ಆದೇಶ ಸಂಖ್ಯೆ:ಸಇ 115 ರರವಿ 2016 ಬೆಂಗಳೂರು ದಿನಾಂಕ:26.04.2016 ಮತ್ತು ಸೇರ್ಪಡೆ ಆದೇಶ ದಿನಾಂಕ: 24.05.2016.
3) ಸರ್ಕಾರದ ಆದೇಶ ಸಂಖ್ಯೆ: ಸಿಒ 273 ಸಿಎಲ್ಎಸ್ 2016, ದಿನಾಂಕ: 01.06.2016.
4) ಸರ್ಕಾರದ ಆದೇಶ ಸಂಖ್ಯೆ: ಸಿಒ 243 ಸಿಎಲ್ಎಸ್ 2016, ದಿನಾಂಕ: 23.07.2016.
5) ಸರ್ಕಾರದ ಆದೇಶ ಸಂಖ್ಯೆ: ಸಿಒ 244 ಸಿಎಲ್ಎಸ್ 2016, ದಿನಾಂಕ: 16.05.2016.
6) ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 3 ಟಿಎಫ್‌ಪಿ 2016, ದಿನಾಂಕ: 02.04.2016.
7) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಸಿಆರ್‌ಡಿ/ಸಿಎಬಿ–1/6/2016–17, ದಿನಾಂಕ:23.07.2016.

**ಪ್ರಸ್ತಾವನೆ:**

2016–17ನೇ ಸಾಲಿನಲ್ಲಿ ಸಹಕಾರ ಇಲಾಖೆಯಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯನ್ನು ಮುಂದುವರೆಸಲಾಗಿದೆ.

ಮೇಲೆ (1) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಸದರಿ ಯೋಜನೆಗೆ ಲೆಕ್ಕ ಶೀರ್ಷಿಕೆ 2425–00–107–2–41 ರಡಿ ₹. 88881.00 ಲಕ್ಷಗಳ ಅನುದಾನ ಹಂಚಿಕೆ ಮಾಡಿ ಆದೇಶಿಸಲಾಗಿರುತ್ತದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶ ಮತ್ತು ಸೇರ್ಪಡೆ ಆದೇಶಗಳಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಗಾಗಿ ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಒಟ್ಟು ₹. 88881.00 ಲಕ್ಷಗಳ ಆಯವ್ಯಯ ಅವಕಾಶ ಕಲ್ಪಿಸಿ ಈ ಯೋಜನೆಯನ್ನು 2016–17ನೇ ಸಾಲಿಗೆ ಮುಂದುವರೆದ ಯೋಜನೆಯೆಂದು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ಯೋಜನೆಯಡಿ ಅವಕಾಶ ಕಲ್ಪಿಸಿರುವ ₹. 88881.00 ಲಕ್ಷಗಳ ಪೈಕಿ ಮೊದಲನೇ ಕಂತಿನಲ್ಲಿ ₹. 22220.25 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ (4) & (5) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಶೂನ್ಯ ಬಡ್ಡಿ ದರದಲ್ಲಿ ₹. 3.00ಲಕ್ಷಗಳವರೆಗೆ ಅಲ್ಪಾವಧಿ ಕೃಷಿ ಸಾಲ ನೀಡುವ ಯೋಜನೆಯನ್ನು ಹಾಗೂ ₹. 10.00ಲಕ್ಷಗಳವರೆಗಿನ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಂಬಂಧಿತ ಸಾಲಗಳನ್ನು ಶೇ.3ರ ಬಡ್ಡಿದರದಲ್ಲಿ ಒದಗಿಸಲು ಈ ಯೋಜನೆಗಳನ್ನು ಮುಂದುವರೆಸಲು ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಮೇಲೆ (6) ರಲ್ಲಿ ಓದಲಾದ ಸರ್ಕಾರದ ಆದೇಶದ ಕಂಡಿಕೆ 12ರಲ್ಲಿ ₹. 10.00 ಕೋಟಿಗೂ ಮೇಲ್ಪಟ್ಟ ಆಯವ್ಯಯ ಅವಕಾಶವಿರುವ ಯೋಜನೆಗಳಲ್ಲಿ ಈ ಹಿಂದೆ ಬಿಡುಗಡೆ ಮಾಡಲಾದ ಕಂತಿನ ಮೊಬಲಗಿನ ಶೇ.75ರಷ್ಟು ಬಳಕೆ ಮಾಡಿಕೊಂಡಲ್ಲಿ ಶೇ.25ರಷ್ಟು ಮೊತ್ತವನ್ನು ಮುಂದಿನ ಕಂತಿನಲ್ಲಿ ಬಿಡುಗಡೆ ಮಾಡಲು ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ವಿತ್ತಾಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಮೇಲೆ (7) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ದಿನಾಂಕ:19.07.2016ರವರೆಗೆ ನಿಬಂಧಕರ ಕಛೇರಿಯಲ್ಲಿ ಕೃಷಿ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆ ಮತ್ತು ಮಧ್ಯಮಾವಧಿ ಹಾಗೂ ದೀರ್ಘಾವಧಿ ಕೃಷಿ ಸಾಲಗಳ ಕಂತುಗಳ ಮುಂದೂಡುವ ಯೋಜನೆಯಲ್ಲಿ ಸ್ವೀಕೃತವಾಗಿರುವ ಒಟ್ಟು ₹. 26770.21ಲಕ್ಷಗಳ ಬಿಲ್ಲುಗಳು ಬಿಡುಗಡೆಗೆ ಬಾಕಿ ಇದ್ದು, 2016–17ನೇ ಸಾಲಿನ ಆಯವ್ಯಯದಲ್ಲಿ ಕಲ್ಪಿಸಿರುವ ಅವಕಾಶದ ಪೈಕಿ ಎರಡನೇ ಕಂತಿನಲ್ಲಿ ಸಾಮಾನ್ಯ ಶೀರ್ಷಿಕೆಯಲ್ಲಿ ₹. 19450.25ಲಕ್ಷಗಳು, ವಿಶೇಷ ಘಟಕ ಯೋಜನೆಯಲ್ಲಿ ₹. 595.50 ಲಕ್ಷಗಳು ಮತ್ತು ಗಿರಿಜನ ಉಪಯೋಜನೆಯಡಿ ₹. 658.82ಲಕ್ಷಗಳು ಒಟ್ಟು ಅನುದಾನ ₹. 20704.57ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಮೊದಲನೇ ಕಂತಿನಲ್ಲಿ ಬಿಡುಗಡೆ ಮಾಡಿದ ₹. 22220.25ಲಕ್ಷಗಳನ್ನು ಪೂರ್ಣವಾಗಿ ಬಳಕೆ ಮಾಡಿಕೊಂಡಿರುವುದಾಗಿ ಬಳಕೆ ಪ್ರಮಾಣ ಪತ್ರವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು) ಒದಗಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 273 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 06.09.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಲ್ಲಿ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ರಿಯಾಯತಿ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿಯ ವ್ಯತ್ಯಾಸದ ಬಡ್ಡಿ ಸಹಾಯಧನ ₹.20704.57ಲಕ್ಷ(ಇಪ್ಪತ್ತು ಸಾವಿರದ ಏಳು ನೂರ ನಾಲ್ಕು ಲಕ್ಷದ ಐವತ್ತೇಳು ಸಾವಿರ ರೂಪಾಯಿಗಳು ಮಾತ್ರ)ಗಳನ್ನು 2016–17ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಒದಗಿಸಲಾಗಿರುವ ₹.88881.00ಲಕ್ಷಗಳ ಪೈಕಿ ಎರಡನೇ ತ್ರೈಮಾಸಿಕದಲ್ಲಿ ಕೆಳಕಂಡಂತೆ ಬಿಡುಗಡೆ ಮಾಡಲಾಗಿದೆ:

ಯೋಜನೆ: ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ

ಲೆಕ್ಕಶೀರ್ಷಿಕೆ: 2425–00–107–2–41

(₹.ಲಕ್ಷಗಳಲ್ಲಿ)

| 106–ಸಾಮಾನ್ಯ | 422–ವಿಶೇಷ ಘಟಕ ಯೋಜನೆ | 423–ಗಿರಿಜನ ಉಪಯೋಜನೆ | ಒಟ್ಟು |
|---|---|---|---|
| 19450.25 | 595.50 | 658.82 | 20704.57 |

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಚೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಡ್ರಾ ಮಾಡತಕ್ಕದ್ದು, ಖಾಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ವರದಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ. ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 3 ಟಿಎಫ್‌ಪಿ 2016, ದಿನಾಂಕ: 02.04.2016ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಸಇ 62 ಆಂಆಸ(ಎ) 2016, ದಿನಾಂಕ:06.09.2016 ರಲ್ಲಿ ನೀಡಲಾದ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದ ನಿಮಿತ್ತ,
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 640**
**SC. 25**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಎಂ.ತಿಮ್ಮಾರೆಡ್ಡಿ, ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರಿಗೆ ತಡವಾಗಿ ಪಾವತಿಸಿರುವ ನಿವೃತ್ತಿ ಸೌಲಭ್ಯಗಳ ಮೇಲೆ ಬಡ್ಡಿ ಪಾವತಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ:ಆಕುಕ 55 ಹೆಚ್‌ಎಸ್‌ಹೆಚ್ 2016, ದಿನಾಂಕ:16.03.2016.
2. ಖಜಾನೆ ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಖನಿ/ಬಿಯುಡಿ(2)ಸಿಆರ್ 69/15–16.
3. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪತ್ರ ಸಂಖ್ಯೆ:ಪಿಂಚಣಿ (2)29/2012–13, ದಿನಾಂಕ: 6.6.2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿ, ಸರ್ಕಾರದ ಆದೇಶ ಸಂಖ್ಯೆ:ಆಇ(ವಿಶೇಷ) 199 ಪಿಇಎನ್ 93, ದಿನಾಂಕ:13.09.1994 ಮತ್ತು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ(ವಿಶೇಷ) 01 ಪಿಇಎನ್ 2003, ದಿನಾಂಕ: 21.08.2003 ಹಾಗೂ ಸುತ್ತೋಲೆ ಸಂಖ್ಯೆ:ಆಇ(ವಿಶೇಷ) 1 ಪಿಇಎನ್ 2004, ದಿನಾಂಕ: 2.9.2004 ರನ್ವಯ ಡಾ॥ ಎಂ.ತಿಮ್ಮಾರೆಡ್ಡಿ, ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ಇವರಿಗೆ ನಿವೃತ್ತಿ ಹೊಂದಿದ ನಾಲ್ಕನೇ ತಿಂಗಳ ಪ್ರಾರಂಭದಿಂದ ಮಹಾಲೇಖಪಾಲರು ಪ್ರಾಧೀಕರಿಸಿದ ಪತ್ರದ ದಿನಾಂಕದ ಹಿಂದಿನ ತಿಂಗಳ ಕೊನೆಯ ದಿನಾಂಕದವರೆಗೆ ವಿಳಂಬವಾಗಿ ಪಾವತಿಸಿದ ನಿವೃತ್ತಿ ಉಪದಾನದ ಮೊತ್ತ ₹. 7,94,288/-ಗಳಿಗೆ, ನಿವೃತ್ತಿ ವೇತನ ಮೊತ್ತ ₹. 24,070/-ಗಳಿಗೆ ಇಳಿಮುಖ ದರದಲ್ಲಿ ಮತ್ತು ಅರ್ಜಿತ ರಜೆ ನಗದೀಕರಣದ ಮೊತ್ತ 4,54,135/-ಗಳಿಗೆ ಶೇಕಡ 8 ರಂತೆ ಬಡ್ಡಿ ಪಾವತಿಸಲು ಸರ್ಕಾರ ಮಂಜೂರಾತಿ ನೀಡಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ(2)ರಲ್ಲಿ, ಡಾ॥ ತಿಮ್ಮರೆಡ್ಡಿ ಇವರಿಗೆ ಯಾವ ದಿನಾಂಕದಿಂದ ಯಾವ ದಿನಾಂಕದವರೆಗೆ ಎಷ್ಟು ಬಡ್ಡಿಯನ್ನು ಪಾವತಿಸಬೇಕು ಎಂದು ಸ್ಪಷ್ಟವಾಗಿ ನಮೂದಿಸಿರುವ, ಇಂಕ್ ಸಹಿ ಇರುವ ಖಜಾನೆ ನಿರ್ದೇಶಕರಿಗೆ ಗುರುತು ಮಾಡಿರುವ ಆದೇಶವನ್ನು ಹೊರಡಿಸಿದಲ್ಲಿ, ಪಾವತಿಗೆ ಕ್ರಮವಹಿಸಲಾಗುವುದು ಎಂದು ತಿಳಿಸಲಾಗಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಮೇಲೆ ಓದಲಾದ ಕ್ರಮ ಸಂಖ್ಯೆ(3)ರಲ್ಲಿ, ಡಾ॥ಎಂ.ತಿಮ್ಮಾರೆಡ್ಡಿ ಇವರಿಗೆ ತಡವಾಗಿ ಪಾವತಿಸಿಲಾಗಿರುವ ನಿವೃತ್ತಿ ಸೌಲಭ್ಯಗಳಿಗೆ ಬಡ್ಡಿ ಪಾವತಿಸಲು ಬಡ್ಡಿ ಲೆಕ್ಕಾಚಾರದ ತಖ್ತೆಯನ್ನು ತಯಾರಿಸಿ ಕಳುಹಿಸಿಕೊಡಲಾಗಿದೆ.

ಡಾ॥ಎಂ.ತಿಮ್ಮಾರೆಡ್ಡಿ, ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ಇವರಿಗೆ ತಡವಾಗಿ ಪಾವತಿಸಿದ ನಿವೃತ್ತಿ ಉಪದಾನಗಳಿಗೆ ದಿನಾಂಕ:1.9.2012 ರಿಂದ ಪ್ರಾರಂಭಿಸಿ, ದಿನಾಂಕ:1.8.2013ರವರೆಗೆ ಶೇಕಡ 8ರ ಬಡ್ಡಿ ದರದಲ್ಲಿ, ನಿವೃತ್ತಿ ಉಪದಾನದ ಮೊತ್ತ ₹. 7,94,288/- ಗಳಿಗೆ ₹. 74,134/- ಗಳು, ಪಿಂಚಣಿ ಮೊತ್ತ ₹. 24,070/-ಗಳಿಗೆ ಇಳಿಕೆ ಕ್ರಮದಲ್ಲಿ ₹. 12,480/- ಗಳು ಹಾಗೂ ರಜೆ ನಗದೀಕರಣ ಮೊತ್ತ ರೂ. 4,54,135/– ಗಳಿಗೆ ₹. 48,443/-ಗಳ ಒಟ್ಟು ಮೊತ್ತ ₹. 1,35,057 ಗಳನ್ನು ಪಾವತಿಸಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 55 ಎಚ್‌ಎಸ್‌ಎಚ್ 2016, ಬೆಂಗಳೂರು, ದಿನಾಂಕ: 17.09.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ:ಆಕುಕ 55 ಹೆಚ್‌ಎಸ್‌ಹೆಚ್ 2016, ದಿನಾಂಕ:16.03.2016ರ ಆದೇಶವನ್ನು ಈ ಕೂಡಲೇ ರದ್ದುಗೊಳಿಸಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ: ಆಇ(ವಿಶೇಷ) 199 ಪಿಇಎನ್ 93, ದಿನಾಂಕ:13.09.1994 ಮತ್ತು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ (ವಿಶೇಷ) 01 ಪಿಇಎನ್ 2003, ದಿನಾಂಕ:21.08.2003 ಹಾಗೂ ಸುತ್ತೋಲೆ ಸಂಖ್ಯೆ:ಆಇ(ವಿಶೇಷ) 1 ಪಿಇಎನ್ 2004, ದಿನಾಂಕ:02.09.2004 ರನ್ವಯ ಡಾ॥ಎಂ.ತಿಮ್ಮಾರೆಡ್ಡಿ ಇವರಿಗೆ ದಿನಾಂಕ:1.9.2012 ರಿಂದ ಪ್ರಾರಂಭಿಸಿ, ದಿನಾಂಕ:1.8.2013ರವರೆಗೆ ಶೇಕಡ 8ರ ಬಡ್ಡಿ ದರದಲ್ಲಿ, ತಡವಾಗಿ ಪಾವತಿಸಿರುವ ನಿವೃತ್ತಿ ಉಪದಾನದ ಮೊತ್ತ ₹.7,94,288/– ಗಳಿಗೆ ₹. 74,134/- ಗಳು, ಪಿಂಚಣಿ ಮೊತ್ತ ₹. 24,070/- ಗಳಿಗೆ ಇಳಿಕೆ ಕ್ರಮದಲ್ಲಿ ₹. 12,480/-ಗಳು ಹಾಗೂ ರಜೆ ನಗದೀಕರಣ ಮೊತ್ತ ₹. 4,54,135/- ಗಳಿಗೆ ₹. 48,443/- ಗಳ, ಒಟ್ಟು ಮೊತ್ತ ₹. 1,35,057/- ಗಳನ್ನು ಪಾವತಿಸಲು ಸರ್ಕಾರದ ಮಂಜೂರಾತಿ ನೀಡಿದೆ.

**ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ(ವಿ) 29 ಪಿಇಎನ್1 2016, ದಿನಾಂಕ:22.02.2016 ಮತ್ತು 08.08.2016ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎನ್. ನರಸಿಂಹರಾಜು,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಸೇವೆಗಳು)

**PR. 641**
**SC. 20**

## ಇಂಧನ ಸಚಿವಾಲಯ

**ವಿಷಯ :** ಶ್ರೀಮತಿ ನಂದಾ ವಿ.ಕುಲಕರ್ಣಿ, ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರು, ಧಾರವಾಡ ಇವರನ್ನು ಕಲ್ಬುರ್ಗಿ ವಿಭಾಗದ ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಯಲ್ಲಿ ಹೆಚ್ಚುವರಿ ಪ್ರಭಾರದಲ್ಲಿ ಮುಂದುವರೆಸುವ ಕುರಿತು.

**ಓದಲಾಗಿದೆ :**
1. ದಿನಾಂಕ: 30.04.2010 ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 2 ಟಿಎಫ್‌ಪಿ 2010.
2. ದಿನಾಂಕ: 06.08.2015 ರ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಮುವಿಪ/ಸಿಸ1/14879–77/15–16.
3. ದಿನಾಂಕ: 23.12.2015 ರ ಪತ್ರ ಸಂಖ್ಯೆ: ಮುವಿಪ/ಸಿಸ1/27684/15–16.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಆದೇಶದಲ್ಲಿ ಇಲಾಖಾ ಮುಖ್ಯಸ್ಥರಿಗೆ ನೀಡಲಾದ ಅಧಿಕಾರ ಪ್ರತ್ಯಯೋಜನೆಯನ್ವಯ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಮುಖ್ಯ ವಿದ್ಯುತ್ ಪರಿವೀಕ್ಷಕರ ಅಧಿಕೃತ ಜ್ಞಾಪನ ಪತ್ರದಲ್ಲಿ ಶ್ರೀಮತಿ ನಂದಾ ವಿ.ಕುಲಕರ್ಣಿ, ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರು, ಧಾರವಾಡ ಇವರನ್ನು ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 68ರ ಮೇರೆಗೆ ದಿನಾಂಕ; 06.08.2015 ರಿಂದ ಜಾರಿಗೆ ಬರುವಂತೆ 04 ತಿಂಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಕಲ್ಬುರ್ಗಿ ವಿಭಾಗದ ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಯಲ್ಲಿ ಹೆಚ್ಚುವರಿ ಪ್ರಭಾರದಲ್ಲಿರಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಪತ್ರದದಲ್ಲಿ ಶ್ರೀಮತಿ ನಂದಾ ವಿ.ಕುಲಕರ್ಣಿ ರವರ 04 ತಿಂಗಳ ಪ್ರಭಾರದ ಅವಧಿ ಮುಗಿದಿರುವುದರಿಂದ, ನಿಯಮಾನುಸಾರ ಸದರಿಯವರ ಪ್ರಭಾರದ ಅವಧಿಯನ್ನು ವಿಸ್ತರಿಸಿ ಆದೇಶಿಸಲು ಕೋರಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 11 ಇಬಿಎಸ್ 2016, ಬೆಂಗಳೂರು, ದಿನಾಂಕ: 16.09.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಮತಿ ನಂದಾ ವಿ.ಕುಲಕರ್ಣಿ, ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರು, ಧಾರವಾಡ ಇವರನ್ನು ದಿನಾಂಕ: 06.12.2015 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕಲ್ಬುರ್ಗಿ ವಿಭಾಗದಲ್ಲಿ ಖಾಲಿ ಇರುವ ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಯ ಹೆಚ್ಚುವರಿ ಪ್ರಭಾರದಲ್ಲಿ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಶಿವಕುಮಾರ್,**
ಪೀಠಾಧಿಕಾರಿ,
ಇಂಧನ ಇಲಾಖೆ.

**PR. 642**
**SC. 250**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.